KA / BG-GPO/2515/WPP-47/2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೪ | ಬೆಂಗಳೂರು, ಗುರುವಾರ, ಅಕ್ಟೋಬರ್ ೨೨, ೨೦೦೯ (ಆಶ್ವಯುಜ ೩೦, ಶಕ ವರ್ಷ ೧೯೩೧) | ಸಂಚಿಕೆ ೪೨ |
|---|---|---|

## ಭಾಗ – ೬

## ಬೆಂಗಳೂರು ವಿಭಾಗಕ್ಕೆ ಮತ್ತು ಬೆಂಗಳೂರು ನಗರ, ಬೆಂಗಳೂರು ಗ್ರಾಮಾಂತರ, ಕೋಲಾರ, ತುಮಕೂರು, ಚಿತ್ರದುರ್ಗ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಗಳಿಗೆ ಸ್ಥಳೀಯವಾಗಿ ಅನ್ವಯವಾಗುವ ಅಧಿಸೂಚನೆಗಳು ಮತ್ತು ಆದೇಶಗಳು.

**ಕಂದಾಯ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ: ಕಂಇ 23 ಎಲ್‌ಆರ್‌ಎಂ 2009, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2009**

ಮೆ:ಜೈರಾಜ್ ಇಸ್ಪಾತ್ ಲಿ., ಹೈದರಾಬಾದ್, ಇವರಿಗೆ ಬಳ್ಳಾರಿ ಜಿಲ್ಲೆ, ಬಳ್ಳಾರಿ ತಾಲ್ಲೂಕು, ಬೆಳಗಲ್ ಗ್ರಾಮದ ಸರ್ವೆ ನಂ.66ಎ ಹಾಗೂ ಇತರೆಗಳಲ್ಲಿ ಒಟ್ಟು ವಿಸ್ತೀರ್ಣ 42 ಎಕರೆ 23 ಗುಂಟೆ ಕೃಷಿ ಜಮೀನನ್ನು ಕೈಗಾರಿಕೆ ಉದ್ದೇಶಕ್ಕಾಗಿ ನಮೂನೆ 15ಎ ಮತ್ತು 15–ಎಎ, ಗಳಲ್ಲಿನ ಮಾಹಿತಿ ಅನುಸರಿಸಿ ಜಿಲ್ಲಾಧಿಕಾರಿಗಳು, ಬಳ್ಳಾರಿ ಜಿಲ್ಲೆ, ಇವರ ಪತ್ರ ಸಂಖ್ಯೆ:ಕಂಭೂಸು/40/2008–09 ದಿನಾಂಕ:5/17.02.09 ರಲ್ಲಿ ಪ್ರಸ್ತಾಪಿತ ಮೇಲ್ಕಂಡ ನಂ.66ಎ ಹಾಗೂ ಇತರೆಗಳಲ್ಲಿ ಒಟ್ಟು ವಿಸ್ತೀರ್ಣ 42 ಎಕರೆ 23 ಗುಂಟೆ ಕೃಷಿ ಜಮೀನನ್ನು ಖರೀದಿಸಲು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 (1)ರಡಿ ಅನುಮೋದನೆ ನೀಡುವ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವಿತ ಜಮೀನು ಖರೀದಿಸಲು ಖಾತೆದಾರರಿಂದ ಕರಾರು ಪತ್ರ ಮಾಡಿಕೊಂಡಿರುತ್ತಾರೆ ಹಾಗೂ ಸದರಿ ಜಮೀನು ಕರ್ನಾಟಕ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಅಧಿನಿಯಮ 1978, ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ರಾಜ್ಯ ಸರ್ಕಾರವು ಸಾರ್ವಜನಿಕ ಹಿತಾಸಕ್ತಿಯ ಮೇಲೆ ಕಾರಣಗಳನ್ನು ದಾಖಲಿಸಿ ನಿರ್ದಿಷ್ಟ ಉದ್ದೇಶಕ್ಕಾಗಿ ಎಷ್ಟೇ ವಿಸ್ತೀರ್ಣದ ಭೂಮಿಯನ್ನು ಷರತ್ತು ಮತ್ತು ನಿಬಂಧನೆಗಳನ್ನು ವಿಧಿಸಿ ಕರ್ನಾಟಕ ಭೂ ಸುಧಾರಣಾ ಅಧಿನಿಯಮ 1961ರ ಕಲಂ 63, 79ಎ, 79ಬಿ ಅಥವಾ 80ರ ಅವಕಾಶಗಳಿಂದ ವಿನಾಯಿತಿ ನೀಡಲು ಸದರಿ ಅಧಿನಿಯಮದ ಕಲಂ 109(1ಎ) ರಡಿ ಅವಕಾಶ ಕಲ್ಪಿಸಿದೆ.

ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ಅಧಿನಿಯಮ 1995ರ ಕಲಂ 109(1ಎ) ಮತ್ತು ಕರ್ನಾಟಕ ಭೂ ಸುಧಾರಣೆ (ತಿದ್ದುಪಡಿ) ನಿಯಮಗಳು, 1996ರ ನಿಯಮ 38–ಬಿ ಮತ್ತು 38–ಸಿ ರಲ್ಲಿನ ಷರತ್ತುಗಳನ್ನು ಪೂರೈಸಿದ್ದು ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 63, 79ಎ, 79ಬಿ, ಅಥವಾ 80ಕ್ಕೆ ವಿನಾಯಿತಿ ನೀಡಿ ಮೆ:ಜೈರಾಜ್ ಇಸ್ಪಾತ್ ಲಿ., ಹೈದರಾಬಾದ್, ಇವರಿಗೆ ಬಳ್ಳಾರಿ ಜಿಲ್ಲೆ ಬಳ್ಳಾರಿ ತಾಲ್ಲೂಕಿನ ಬೆಳಗಲ್ ಗ್ರಾಮದ ನಂ.66ಎ ಹಾಗೂ ಇತರೆಗಳಲ್ಲಿ ಒಟ್ಟು ವಿಸ್ತೀರ್ಣ 42 ಎಕರೆ 23 ಗುಂಟೆ ಕೃಷಿ ಜಮೀನನ್ನು ಕೈಗಾರಿಕೆ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 ರಡಿ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟಂತೆ ಸರ್ಕಾರದ ಅನುಮತಿ ನೀಡಲಾಗಿದೆ:–

**ಷರತ್ತುಗಳು**

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಆ ಬಗ್ಗೆ ಜಿಲ್ಲಾಧಿಕರಿಗಳ ಮುಖಾಂತರ ಸರ್ಕಾರಕ್ಕೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.
2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ, ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯ್ದೆ, 1956ರ ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 51 ಪೇಯ್ಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ/ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆ ಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಜಮೀನು ನಗರಾಭಿವೃದ್ಧಿ ಪ್ರಾಧಿಕಾರದ ಸಿ.ಡಿ.ಪಿ/ಒ.ಡಿ.ಪಿ. ವ್ಯಾಪ್ತಿಯೊಳಗೆ ಬಂದರೆ, ಅದರಂತೆ ಅನುಮತಿ ಪಡೆದು ಉಪಯೋಗಿಸತಕ್ಕದ್ದು.
4. ಈ ಅನುಮತಿಯು ಕರ್ನಾಟಕ ಭೂಸುಧಾರಣೆ ಅಧಿನಿಯಮ, 1961ರ ಕಲಂ 109 ರನ್ವಯ ವಿನಾಯಿತಿ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.
5. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಕರ್ನಾಟಕ ಭೂ ಕಂದಾಯ ಅಧಿನಿಯಮ, 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯತಕ್ಕದ್ದು.
6. ಸಂಸ್ಥೆ ನಡೆಸುವ ಚಟುವಟಿಕೆಗಳು ಸ್ಥಳೀಯ ಕಾನೂನು, ಕರ್ನಾಟಕ ಮತ್ತು ಭಾರತದ ಕಾನೂನುಗಳನ್ನು ಪಾಲಿಸತಕ್ಕದ್ದು.
7. ಪ್ರಸ್ತಾಪಿತ ಜಮೀನುಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯ ಕೈಗೊಳ್ಳುವ ಮೊದಲು ಜಮೀನಿನ ವಿನ್ಯಾಸಕ್ಕೆ ನಗರ ಯೋಜನಾ ಇಲಾಖೆ/ಅಭಿವೃದ್ಧಿ ಪ್ರಾಧಿಕಾರ/ಸ್ಥಳೀಯ ಪ್ರಾಧಿಕಾರಗಳಿಂದ ಅನುಮೋದನೆ ಪಡೆಯತಕ್ಕದ್ದು.
8. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯ ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 400

**ಟಿ.ಎನ್. ನಾರಾಯಣಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂ ಸುಧಾರಣೆ)

## ತಹಶೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು, ಆನೇಕಲ್

**ಪ್ರಕಟಣೆ**

**ನಮೂನೆ-27**

**ನಂ. ಎಲ್.ಎನ್.ಡಿ/ಸಿ.ಆರ್/173/09-10, ದಿನಾಂಕ: 20ನೇ ಆಗಸ್ಟ್ 2009**

1) ಕರ್ನಾಟಕ ರಾಜ್ಯ ಸರ್ಕಾರದ ನಿಯಮಾವಳಿಗಳಂತೆ ಸರ್ಕಾರಿ ಗುಂಡು ತೋಪು ಜಮೀನಾಗಿರುತ್ತದೆ. ಅದರಂತೆ ವಣಕನಹಳ್ಳಿ ಗ್ರಾಮದ ಸ.ನಂ. 8 ರಲ್ಲಿ ವಿಸ್ತೀರ್ಣ 1-00 (ಎ-ಗುಂ) ಜಮೀನಿನಲ್ಲಿ 0-20 ಗುಂ ಪಶುವೈದ್ಯ ಶಾಲೆ ಮತ್ತು 0-20 ಗುಂ ಸ್ಮಶಾನಕ್ಕೆ ಕಾಯ್ದಿರಿಸಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964 ರ ಕಲಂ 68 (1) ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ.ನಂ.8 ಜಮೀನಿನಲ್ಲಿ 1-00 (ಎ-ಗುಂ) ಜಮೀನಿನಲ್ಲಿ 0-20 ಗುಂ ಪಶು ವೈದ್ಯ ಶಾಲೆ ಮತ್ತು 0-20 ಗುಂ ಸ್ಮಶಾನಕ್ಕೆ ಕಾಯ್ದಿರಿಸುವ ಉದ್ದೇಶದಿಂದ ಹಾಗೂ ಸಾರ್ವಜನಿಕರ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತವೆ.
2) ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಥವಾ ಇತರೆ ಆಸಕ್ತಿ ಉಳ್ಳವರು ಅಂದರೆ ಸರ್ಕಾರಿ ಗುಂಡು ಜಮೀನಿನಲ್ಲಿ 0-20 ಗುಂ ಪಶು ವೈದ್ಯ ಶಾಲೆ ಮತ್ತು 0-20 ಗುಂ ಸ್ಮಶಾನಕ್ಕೆ ವಿಲೇವಾರಿ ಮಾಡಿರುವುದರಿಂದ ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಂದು 90 ದಿನಗಳ ಒಳಗಾಗಿ ಲಿಖಿತ ಮೂಲಕ ಆನೇಕಲ್ ತಾಲ್ಲೂಕು ತಹಶೀಲ್ದಾರ್ ರವರಿಗೆ ತಲುಪುವಂತೆ ಕಳಿಸುವುದು ನಿಗದಿತ ವೇಳೆಯನ್ನು ಮೀರಿ ಬರುವಂತಹ ಆಕ್ಷೇಪಣೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಅಲ್ಲದೆ

ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ಗುಂಡು ತೋಪು ಜಮೀನಿನ 1–00 ಎ ಜಮೀನಿನಲ್ಲಿ 0–20 ಗುಂ ಪಶು ವೈದ್ಯ ಶಾಲೆ ಮತ್ತು 0–20 ಗುಂ ಸ್ಮಶಾನಕ್ಕೆ ಸಾರ್ವಜನಿಕವಾಗಿ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

ಜಿಲ್ಲೆ: ಬೆಂಗಳೂರು ತಾಲ್ಲೂಕು: ಆನೇಕಲ್ ಗ್ರಾಮ: ವಣಕನಹಳ್ಳಿ

ಸ.ನಂ.– 8 ವಿಸ್ತೀರ್ಣ: 1–00 ಎ–ಗುಂ ವರ್ಗೀಕರಣ: ಗುಂಡು ತೋಪು

ಪೂರ್ವಕ್ಕೆ: ಸ.ನಂ.–14, 10 ಪಶ್ಚಿಮಕ್ಕೆ: ಸ.ನಂ.–9

ಉತ್ತರಕ್ಕೆ: ಸ.ನಂ.–106 ದಕ್ಷಿಣಕ್ಕೆ: ಸ.ನಂ.–12

ತಹಶೀಲ್ದಾರ್,
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್. 401

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ತುಮಕೂರು ಜಿಲ್ಲೆ, ತುಮಕೂರು

### ರದ್ದಿಯಾತಿ ಅಧಿಸೂಚನೆ

**ಪ್ರಕರಣದ ಸಂಖ್ಯೆ: ಎಲ್‌ಎಕ್ಯೂ.ಎಸ್‌ಆರ್: 31/09–10, ದಿನಾಂಕ: 18ನೇ ಆಗಸ್ಟ್ 2009**

ಭೂಸ್ವಾಧೀನ ಕಾಯಿದೆ 1894 (ಸೆಂಟ್ರಲ್ ಕಾಯಿದೆ 1894)ರಂತೆ ವಿಧಿ 4(1)ರ ಅಧಿಸೂಚನೆ ಸಂಖ್ಯೆ:ಎಲ್‌ಎಕ್ಯೂಎಸ್‌ಆರ್: 75/07–08 ದಿನಾಂಕ: 24.03.2008 ರಂತೆ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಇವರಿಂದ ಅನುಮೋದಿಸಿದ್ದು, ಸದರಿ ಅಧಿಸೂಚನೆಯು ದಿನಾಂಕ: 05.06.2008ರ ಕರ್ನಾಟಕ ರಾಜ್ಯ ಪತ್ರದ ಪುಟ 732 ರಿಂದ 736 ವರೆಗೆ ಭಾಗ–6ರಲ್ಲಿ ಕನ್ನಗುಣಿ, ನಡೆಮಾವಿನಪುರ ಗ್ರಾಮಗಳ ಜಮೀನು ಹೇಮಾವತಿ ನಾಲಾ ಯೋಜನೆಗೆ ಭೂಸ್ವಾಧೀನಪಡಿಸಲು ಪ್ರಕಟಣೆ ಹೊರಡಿಸಿರುತ್ತದೆ. ಆದರೆ ಈ ಗ್ರಾಮದ ಬಾಬ್ತು ಜಂಟಿ ಮೋಜಣಿ ಕಾರ್ಯ ಪೂರೈಸಿದಾಗ ಈ ಕೆಳಕಂಡ ಅನುಸೂಚಿಯಲ್ಲಿ ನಮೂದಿಸಿರುವ ಸರ್ವೆ ನಂಬರ್‌ಗಳ ಬಾಬ್ತು ಕಲಂ 4(1) ರಂತೆ ಪ್ರಕಟಿಸಲಾದ ವಿಸ್ತೀರ್ಣಕ್ಕಿಂತ ಕಡಿಮೆ ವಿಸ್ತೀರ್ಣ ಭೂಸ್ವಾಧೀನಕ್ಕೆ ಒಳಪಡುವುದೆಂದು ಕಂಡು ಬಂದಿರುವುದರಿಂದ ಕಲಂ 4(1) ರಲ್ಲಿ ಹೆಚ್ಚುವರಿಯಾಗಿ ಪ್ರಕಟವಾಗಿದ್ದ ವಿಸ್ತೀರ್ಣವನ್ನು ರದ್ದುಪಡಿಸಲು ರದ್ದಿಯಾತಿ ಅಧಿಸೂಚನೆ ಹೊರಡಿಸಿರುವುದಾಗಿ ಈ ಮೂಲಕ ಪ್ರಕಟಿಸಲಾಗಿದೆ.

**ಅನುಸೂಚಿ**

**ಜಿಲ್ಲೆ:** ತುಮಕೂರು **ಹೋಬಳಿ:** ಯಡಿಯೂರು

**ತಾಲ್ಲೂಕು:** ಕುಣಿಗಲ್ **ಗ್ರಾಮ:** ಕನ್ನಗುಣಿ

| ಕ್ರ. ಸಂ. | 4(1)ರ ಕ್ರ.ಸಂ. | ಹಿಡುವಳಿದಾರರ ಹೆಸರುಗಳು | ಸ. ನಂ. | ಭೂ ಸ್ವಾಧೀನಕ್ಕೊಳ ಪಡದ ಕಡಿಮೆಯಾದ ವಿಸ್ತೀರ್ಣ |
|---|---|---|---|---|
| | | **ಗ್ರಾಮ: ಕನ್ನಗುಣಿ** | | |
| 1 | 1 | ಮುತ್ತಲಮ್ಮ ದೇವರು, ಕಲ್ಲಯ್ಯ, ಮುತ್ತಲಮ್ಮ ದೇವರು | 56 | 0–02 |
| 2 | 3 | ಮುತ್ತಯ್ಯ, ಕೆ.ಪಿ. ಕೃಷ್ಣಪ್ಪ, ಜಯಮ್ಮ, ಮುತ್ತಯ್ಯ | 52/2 | 0–02 |

ಪಿ.ಆರ್. 402 ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ರಾಮನಗರ ಜಿಲ್ಲೆ, ರಾಮನಗರ

### ತಿದ್ದುಪಡಿಯ ಅಧಿಸೂಚನೆ

**ಭೂಆರ್ಜನೆ ಅಧಿನಿಯಮದ 4(1)ನೇ ಪ್ರಕರಣದ ಮೇರೆಗಿನ ಅಧಿಸೂಚನೆ**

**ಕ್ರಮಾಂಕ ಎಲ್‌ಎಕ್ಯೂಸಿಆರ್ 141/07–08, ದಿನಾಂಕ: 12ನೇ ಜನವರಿ 2009**

ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ ಇವರ ಕಲಂ4(1)ರ ಅಧಿಸೂಚನೆಯಲ್ಲಿ ರಾಮನಗರ ತಾಲ್ಲೂಕು, ಕಸಬಾ ಹೋಬಳಿ, ದೊಡ್ಡಮಣ್ಣುಗುಡ್ಡೆ ಗ್ರಾಮದಲ್ಲಿ ಸರ್ಕಾರಿ ತಾಂತ್ರಿಕ ಶಿಕ್ಷಣ ಕಾಲೇಜು ನಿರ್ಮಾಣಕ್ಕಾಗಿ ಅವಶ್ಯಕವಾಗಿದೆ ಎಂದು ದೊಡ್ಡಮಣ್ಣುಗುಡ್ಡೆ ಗ್ರಾಮದ ಸರ್ವೆ ನಂ.1/308ರಲ್ಲಿ 4 ಎಕರೆ 11 ಗುಂಟೆ ಜಮೀನಿಗೆ ವಿಶೇಷ ಭೂ ಸ್ವಾಧೀನಾಧಿಕಾರಿಗಳು, ರಾಮನಗರ ಉಪವಿಭಾಗ, ರಾಮನಗರ ಇವರ ವರದಿಯಂತೆ ಕರ್ನಾಟಕ ಭೂಸ್ವಾಧೀನ ಕಾಯ್ದೆ ಕಲಂ 4(1)ರ ಅನ್ವಯ ಆದೇಶವನ್ನು ಹೊರಡಿಸಿದ್ದು ಕರ್ನಾಟಕ ರಾಜ್ಯ ಪತ್ರದಲ್ಲಿ ಪುಟದ ಸಂಖ್ಯೆ 119ರಲ್ಲಿ ಭಾಗ 6 ರಲ್ಲಿ ದಿನಾಂಕ:29.01.09 ರಂದು ಪ್ರಕಟಗೊಂಡಿರುತ್ತದೆ. ಭೂ ಮಾಲೀಕರಿಗೆ ಕಲಂ 4(2)ರ ನೋಟೀಸ್‌ನ್ನು ಜಾರಿ ಮಾಡಲು ಕಳುಹಿಸಿದಾಗ ತಹಶೀಲ್ದಾರ್ ರಾಮನಗರ ಇವರು ಸದರಿ ಜಮೀನನ್ನು ಭೂ ಮಾಲೀಕರು ಶ್ರೀ ಲಿಯಾಕತ್ ಅಲಿಖಾನ್ ಬಿನ್ ಸಾದತ್ ಅಲೀಖಾನ್ ಎಂಬುವವರಿಗೆ ಮಾರಾಟ ಮಾಡಿದ್ದು ಎಂ.ಆರ್. 72/07–08ರಂತೆ ಕ್ರಯದಾರರಿಗೆ ಖಾತೆಯಾಗಿರುತ್ತದೆ.

ಈ ಹಿನ್ನೆಲೆಯಲ್ಲಿ ಹಿಂದಿನ ಭೂ ಮಾಲೀಕರಿಗೆ ನೋಟೀಸ್‌ಗಳನ್ನು ಜಾರಿ ಮಾಡಲು ಸಾಧ್ಯವಿಲ್ಲವೆಂದು ವರದಿ ಮಾಡಿರುತ್ತಾರೆ. ಸದರಿಯವರ ವರದಿಯಂತೆ ಕೆಳಕಂಡಂತೆ ಸೂಕ್ತ ತಿದ್ದುಪಡಿಯೊಂದಿಗೆ ಓದಿಕೊಳ್ಳಲು ಈ ಮೂಲಕ ಆದೇಶಿಸಿದೆ.

**ಜಿಲ್ಲೆ:** ರಾಮನಗರ **ತಾಲ್ಲೂಕು:** ರಾಮನಗರ

**ಹೋಬಳಿ:** ಕಸಬಾ **ಗ್ರಾಮ:** ದೊಡ್ಡ ಮಣ್ಣುಗುಡ್ಡೆ

| ಕ್ರ. ಸಂ. | ಸರ್ವೆ ನಂ. | 4(1)ರ ಅಧಿಸೂಚನೆಯಲ್ಲಿ ಪ್ರಕಟವಾಗಿರುವುದು | ಎಂದು ಓದಿಕೊಳ್ಳುವುದು |
|---|---|---|---|
| 1 | 1/308 | ಸೈಯದ್ ಫಕ್ರುಲ್ ಖಾದ್ರಿ ಬಿನ್ ಲೇಟ್ ಅಲಾಜಾ ಸೈಯದ್ ಯುಸೂಪ್ ಉಲ್ಲಾ ಶಾ ಖಾದ್ರಿ ಮೊಹಮ್ಮದ್ ಮುಹೀದ್ ಪಾಷ ಬಿನ್ ಲೇ॥ ಮಹಮ್ಮದ್ ಅನ್ವರ್, ಉಸ್ಮಾನ್ ಬೇಗ್ ಬಿನ್ ಲೇ॥ ಖಾಸಿಂ ಬೇಗ್ ಉ. ಅನ್ವರ್ ಬೇಗ್ | ಶ್ರೀ ಲಿಯಾಖತ್ ಅಲಿ ಖಾನ್ ಬಿನ್ ಸಾದತ್ ಅಲಿ ಖಾನ್ |

ಪಿ.ಆರ್. 414 ಜಿಲ್ಲಾಧಿಕಾರಿಗಳು, ರಾಮನಗರ ಜಿಲ್ಲೆ, ರಾಮನಗರ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು

## ಅಧಿಕೃತ ಜ್ಞಾಪನ ಪತ್ರ

**ನಂ: ಎಲ್.ಆರ್.ಎಫ್(ಎ)(109)ಸಿ.ಆರ್.14/08–09, ಬೆಂಗಳೂರು, ದಿನಾಂಕ: 25ನೇ ಆಗಸ್ಟ್ 2009**

**ವಿಷಯ:** ಸುದರ್ಶನ ವಿದ್ಯಾ ಮಂದಿರ (ಯುನಿಟ್ ಆಫ್ ಜ್ಞಾನ ಮಂದಿರ ಟ್ರಸ್ಟ್) ನಂ.1163, 26ನೇ ಎ ಮೈನ್ 4ನೇ ಬ್ಲಾಕ್, ಜಯನಗರ, ಬೆಂಗಳೂರು–42 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 43/1 ರಲ್ಲಿ 0–33 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಹೊಂದಲು ಅನುಮತಿ ಕೋರಿರುವ ಬಗ್ಗೆ.

ಸುದರ್ಶನ ವಿದ್ಯಾ ಮಂದಿರ (ಯುನಿಟ್ ಆಫ್ ಜ್ಞಾನ ಮಂದಿರ ಟ್ರಸ್ಟ್) ನಂ.1163, 26ನೇ ಎ ಮೈನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು–42 ರವರು ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 43/1 ರಲ್ಲಿ 0–33 ಗುಂಟೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಸುಧಾರಣೆ ಕಾಯ್ದೆ ಕಲಂ 109 ರಡಿ ಖರೀದಿಸಲು ಮಾಡಿರುವ ಬೇಡಿಕೆ ಹಾಗೂ ನಮೂನೆ–15ಎ ಮತ್ತು ನಮೂನೆ–15ಎಎ ರಲ್ಲಿ ನೀಡಿದ ಮಾಹಿತಿ ಅನುಸರಿಸಿ ಉಪವಿಭಾಗಾಧಿಕಾರಿಗಳು, ಬೆಂಗಳೂರು ದಕ್ಷಿಣ ಉಪವಿಭಾಗ ರವರ ಪತ್ರ ಸಂಖ್ಯೆ: ಎಲ್.ಆರ್.ಎಫ್ (109) ಸಿ.ಆರ್:4/09–10, ದಿನಾಂಕ: 12.8.2009 ರಲ್ಲಿ ಪ್ರಸ್ತಾವಿತ ಲಕ್ಷ್ಮೀಪುರ ಗ್ರಾಮದ ಸ.ನಂ. 43/1 ರಲ್ಲಿ 0–33 ಗುಂಟೆ ಜಮೀನನ್ನು ಖರೀದಿಸಲು ಸದರಿ ಸಂಸ್ಥೆಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 (1)(II) ರಡಿ ಅನುಮತಿ ನೀಡಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಸಂಸ್ಥೆಯು ನೋಂದಣಿ ಸಂಖ್ಯೆ: ಪಿ.ನಂ.489/67–68, ದಿನಾಂಕ: 6.3.1968 ರಲ್ಲಿ ನೋಂದಾಯಿಸಲ್ಪಟ್ಟಿದೆ. ಖಾತೆದಾರರಿಂದ ಜಮೀನು ಖರೀದಿಸಲು ಕರಾರು ಪತ್ರ ಮಾಡಿಕೊಂಡಿರುತ್ತಾರೆ.

ಪ್ರಸ್ತಾವಿತ ಜಮೀನು ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ (ಪಿ.ಟಿ.ಸಿ.ಎಲ್) ಕಾಯ್ದೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು ಹಾಗೂ ಇನ್ನಿತರ ಪರಭಾರೆ ನಿಷೇಧ ಕಾಯ್ದೆಗಳ ವ್ಯಾಪ್ತಿಗೆ ಒಳಪಡುವುದಿಲ್ಲ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ರ ಕಲಂ 109 ರ ಪ್ರಕಾರ ಶೈಕ್ಷಣಿಕ ಉದ್ದೇಶಕ್ಕೆ 4 ಯುನಿಟ್‌ಗಳವರೆಗೆ ಜಮೀನು ಹೊಂದಲು ಅವಕಾಶ ಕಲ್ಪಿಸಿದೆ. ಈ ಪ್ರಸ್ತಾವನೆ ಕರ್ನಾಟಕ ತಿದ್ದುಪಡಿ ಕಾಯ್ದೆ 1995 ರ ಪ್ರಕಾರ ಕಲಂ 109 (1)(11) ಮತ್ತು ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯಿದೆ 1961 ಕಲಂ 63, 79ಎ, 79ಬಿ ಅಥವಾ 80ಕ್ಕೆ ವಿನಾಯ್ತಿ ನೀಡಿ ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ, ಲಕ್ಷ್ಮೀಪುರ ಗ್ರಾಮದ ಸ.ನಂ. 43/1 ರಲ್ಲಿ 0–33 ಗುಂಟೆ ಜಮೀನನ್ನು ಸುದರ್ಶನ ವಿದ್ಯಾ ಮಂದಿರ (ಯುನಿಟ್ ಆಫ್ ಜ್ಞಾನ ಮಂದಿರ ಟ್ರಸ್ಟ್) ನಂ.1163, 26ನೇ ಎ ಮೈನ್, 4ನೇ ಬ್ಲಾಕ್, ಜಯನಗರ, ಬೆಂಗಳೂರು–42 ರವರಿಗೆ ಶೈಕ್ಷಣಿಕ ಉದ್ದೇಶಕ್ಕಾಗಿ ಖರೀದಿಸಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961 ಕಲಂ 109 (1)(II) ರಡಿ ಹಾಗೂ ಸರ್ಕಾರದ ತಿದ್ದುಪಡಿ ಅಧಿಸೂಚನೆ ನಂ:ವ್ಯಶಾಇ 47 ಶಾಸನ 2001 ಬೆಂಗಳೂರು, ದಿನಾಂಕ: 23.04.2003 ರಂತೆ ಶೈಕ್ಷಣಿಕ ಉದ್ದೇಶಕ್ಕೆ 2 ಯುನಿಟ್‌ಗಳಿದ್ದು, ಜಮೀನನ್ನು ಹೊಂದಲು ಅವಕಾಶ ಕಲ್ಪಿಸಿದೆ. ಹಾಗೂ ಈ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ಅನುಮತಿ ನೀಡಿದೆ.

### ಷರತ್ತುಗಳು

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಖರೀದಿಸಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷದೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಮತ್ತು ಈ ಬಗ್ಗೆ ತಹಸೀಲ್ದಾರ್‌ರವರ ಮೂಲಕ ಈ ಕಛೇರಿಗೆ ಲಿಖಿತವಾಗಿ ಮಾಹಿತಿ ನೀಡತಕ್ಕದ್ದು.

2. ವಿನಾಯಿತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1995 ಕಲಂ 3 ರಲ್ಲಿ ಹೇಳಿರುವಂತೆ ಶೇಕಡ 55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿರುವ ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಸದರಿ ಜಮೀನು ಸಿ.ಡಿ.ಪಿ ಪ್ರಕಾರ ಹಸಿರು ವಲಯದಲ್ಲಿ ಬರುತ್ತಿದ್ದು, ಶೈಕ್ಷಣಿಕ ಉದ್ದೇಶಕ್ಕಾಗಿ ಉಪಯೋಗಿಸಿಕೊಳ್ಳತಕ್ಕದ್ದು. ಇದನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದ ಅನುಮತಿ ಪಡೆಯದೆ ಹಾಗೂ ಅನ್ಯಕ್ರಾಂತ ಪಡಿಸದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
4. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95 ರಂತೆ ಜಿಲ್ಲಾಧಿಕಾರಿಗಳಿಂದ ಅನುಮತಿ ಪಡೆಯಬೇಕು. ಅನಧಿಕೃತ ಕಟ್ಟಡಗಳನ್ನು ಸಕ್ರಮಗೊಳಿಸುವ ಷರತ್ತಿಗೆ ಒಳಪಡಿಸಿದೆ.
5. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ಇವರಿಂದ ಸಿ.ಡಿ.ಪಿ, ಒ.ಡಿ.ಪಿ ಮತ್ತು ಹಸಿರು ವಲಯ ವ್ಯಾಪ್ತಿಯೊಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
6. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾದ ಅನುಮತಿಯನ್ನು ರದ್ದುಪಡಿಸಲಾಗುವುದು ಮತ್ತು ಪ್ರಸ್ತಾಪಿತ ಭೂಮಿಯನ್ನು ಋಣ ಮುಕ್ತವಾಗಿಸಿ ಸರ್ಕಾರದಲ್ಲಿ ನಿಹಿತ ಮಾಡಲಾಗುವುದು.
7. ಈ ಅನುಮತಿ ಭೂ ಸುಧಾರಣೆ ಕಾಯಿದೆ 1961 ರ ಕಲಂ 109 ರನ್ವಯ ಮಾತ್ರ ಮಾಡಿರುತ್ತದೆ. ಬೇರೆ ಕಾನೂನುಗಳಿಗೆ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯ ಕ್ರಮ ಜರುಗಿಸಲು ಅವಕಾಶವಿರುತ್ತದೆ.

ವಿಶೇಷ ಜಿಲ್ಲಾಧಿಕಾರಿಗಳು (ಕಂ),
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 418

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ನಂ:ಎಲ್.ಎನ್.ಡಿ(ಪೂ)ಸಿಆರ್:198/07–08, ದಿನಾಂಕ: 22ನೇ ಆಗಸ್ಟ್ 2009**

**ವಿಷಯ:** ಬೆಂಗಳೂರು ನಗರ ಜಿಲ್ಲೆಯ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಕಣ್ಣೂರು ಗ್ರಾಮದ ಸ.ನಂ. 50 ರಲ್ಲಿ 20–00 ಎಕರೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಹಸ್ತಾಂತರಗೊಳಿಸುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ನಡವಳಿ ಆದೇಶದ ಸಂ.ಆರ್.ಡಿ:265:ಎಲ್‌ಜಿಬಿ:2007 (ಪಿ6) ಬೆಂಗಳೂರು, ದಿನಾಂಕ:27.1.2009.
2. ತಹಶೀಲ್ದಾರ್, ಬೆಂಗಳೂರು ಪೂರ್ವ ತಾಲ್ಲೂಕು ರವರ ಪತ್ರದ ಸಂ:ಎಲ್‌ಎನ್‌ಡಿ:ಸಸ:ಸಿಆರ್: 490/07–08, ದಿನಾಂಕ: 24.10.2007.
3. ಈ ಕಛೇರಿ ಸಮ ಸಂಖ್ಯೆ ತಿಳುವಳಿಕೆ ಪತ್ರದ ದಿನಾಂಕ: 3.11.2007.
4. ಸಹಾಯಕ ಆಯುಕ್ತರು, (ಆಸ್ತಿಗಳು), ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ, ರವರ ಪತ್ರ ಸಂಖ್ಯೆ:ಎಲ್.ಎ.ಕ್ಯೂ:ಸಿಆರ್:02/09–10 ದಿನಾಂಕ: 23.7.2009.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ/ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿದ್ದು, ಅತಿಕ್ರಮಣಕಾರರಿಂದ ಈ ತಹಲ್‌ವರೆಗೆ ಖುಲ್ಲಾ ಪಡಿಸಲಾಗಿರುವ 3,313–28 ಎಕರೆ/ಗುಂಟೆ ಸರ್ಕಾರಿ ತೋಪು ಜಮೀನನ್ನು ಸರ್ಕಾರಿ/ಸಾರ್ವಜನಿಕ ಉಪಯೋಗಕ್ಕಾಗಿ ಸಂಬಂಧಿಸಿದ ಸಂಸ್ಥೆಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ, ಉಲ್ಲೇಖ(1)ರಲ್ಲಿನ ಸರ್ಕಾರದ ನಡವಳಿ ಆದೇಶದ ಸಂಖ್ಯೆ:ಆರ್‌ಡಿ265:ಎಲ್‌ಜಿಬಿ/2007 (ಪಿ6), ಬೆಂಗಳೂರು ದಿನಾಂಕ:27.1.2009 ರ ಆದೇಶದಲ್ಲಿ ಸರ್ಕಾರಿ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತದೆ.

ಸರ್ಕಾರದ ಪೂರ್ವಾನುಮೋದನೆಯಂತೆ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಜಮೀನಿನ ನಕ್ಷೆಯೊಂದಿಗೆ ಜಮೀನನ್ನು ಹಸ್ತಾಂತರಿಸುವಂತೆ ಉಲ್ಲೇಖ (4)ರ ಪತ್ರದಲ್ಲಿ ಕೋರಿರುತ್ತಾರೆ.

ಉಲ್ಲೇಖ (1) ರ ಸರ್ಕಾರದ ಆದೇಶದಂತೆ ಬೆಂಗಳೂರು ಪೂರ್ವ ತಾಲ್ಲೂಕು, ಬಿದರಹಳ್ಳಿ ಹೋಬಳಿ, ಕಣ್ಣೂರು ಗ್ರಾಮದ ಸ.ನಂ. 50 ರಲ್ಲಿ 20–00 ಎಕರೆ ಸರ್ಕಾರಿ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ

ಹಸ್ತಾಂತರಿಸುವ ಬಗ್ಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 20(1)(ಸಿ)ರನ್ವಯ ಈ ಕೆಳಕಂಡ ಷರತ್ತಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1. ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧವಾಗಿರುತ್ತದೆ.
2. ಮಂಜೂರು ಮಾಡಲಾದ ಜಮೀನನ್ನು ಮಂಜೂರಾತಿ ಉದ್ದೇಶಕ್ಕೆ 2 ವರ್ಷದ ಒಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು.
3. ಈ ಭೂಮಿಯಲ್ಲಿ ವಿನಾಶಕಾರಿಯಾದ ಅಥವಾ ಖಾಯಂ ಆಗಿ ಹಾನಿಕಾರಕವಾಗುವ ರೀತಿಯಲ್ಲಿ ಏನನ್ನೂ ಮಾಡತಕ್ಕದ್ದಲ್ಲ.
4. ಯಾವ ಉದ್ದೇಶಕ್ಕಾಗಿ ಮಂಜೂರಾತಿ ಮಾಡಲಾಗಿದೆಯೋ ಅದರ ಹೊರತು ಇತರೇ ಯಾವುದೇ ಉದ್ದೇಶಕ್ಕೆ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
5. ಮಂಜೂರಾತಿ ಸಂಸ್ಥೆಯು ನಿಗದಿತ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕ ಇತ್ಯಾದಿಗಳನ್ನು ಸರ್ಕಾರಕ್ಕೆ ಪಾವತಿಸಿ ಸಂಬಂಧಪಟ್ಟ ಉಪನೋಂದಣಾಧಿಕಾರಿ ಕಛೇರಿಯಲ್ಲಿ ನೋಂದಣಿಯನ್ನು ಮಾಡಿಸಿಕೊಳ್ಳತಕ್ಕದ್ದು.
6. ಈ ಮಂಜೂರಾತಿಯು ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ, ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
7. ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವೆಂದು ಕಂಡುಬಂದಲ್ಲಿ ಮೂರು ತಿಂಗಳ ನೋಟೀಸನ್ನು ಕೊಟ್ಟು ತರುವಾಯ ಹಿಂತೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಅಭಿವೃದ್ಧಿಪಡಿಸಿದ ಬಾಬ್ತು ಯಾವುದೇ ಪರಿಹಾರವನ್ನು ಪಡೆಯಲು ಅರ್ಹರಾಗುವುದಿಲ್ಲ.
8. ಸದರಿ ಜಮೀನಿನಲ್ಲಿ ಅಭಿವೃದ್ಧಿ ಕೆಲಸ ಇತ್ಯಾದಿಗಳನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಪಟ್ಟ ಪ್ರಾಧಿಕಾರಗಳಿಗೆ ನಿಗದಿತ ಶುಲ್ಕ ಸಂದಾಯ/ತೆರಿಗೆ ಸಂದಾಯ ಮಾಡಿ ಕಾನೂನು ರೀತ್ಯ ಪೂರ್ವಾನುಮೋದನೆ ಪಡೆದು ಕಾಮಗಾರಿ ಪ್ರಾರಂಭಿಸಬೇಕು.
9. ಶಾಸನಬದ್ಧ ಕಾಯ್ದೆಗಳ ಕಟ್ಟುಪಾಡುಗಳನ್ನು ಪಾಲಿಸದೇ ಇದ್ದಲ್ಲಿ ಅಥವಾ ಮೇಲ್ಕಂಡ ಯಾವುದೇ ಷರತ್ತುಗಳಿಗೆ ವಿರುದ್ಧವಾಗಿ ನಡೆದಲ್ಲಿ ಜಮೀನಿನ ಮಂಜೂರಾತಿಯನ್ನು ವಜಾ ಮಾಡಲಾಗುವುದು.
10. ಪ್ರಶ್ನಿತ ಜಮೀನಿನಲ್ಲಿ ಸಿಗುವ ಬೆಲೆ ಬಾಳುವ ನಿಧಿ, ನಿಕ್ಷೇಪ ಇತ್ಯಾದಿಗಳು ಸರ್ಕಾರಕ್ಕೆ ಸೇರಿದ್ದಾಗಿರುತ್ತದೆ.
11. ಸದರಿ ಸಂಸ್ಥೆಗೆ ಈ ಜಮೀನು ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
12. ಈ ಜಮೀನಿನಲ್ಲಿ ದೊಡ್ಡ ಮತ್ತು ಸಣ್ಣ ಕೆರೆಕಟ್ಟೆ ಇತ್ಯಾದಿಗಳಿದ್ದಲ್ಲಿ ನಕಾಶೆ ದಾರಿಗಳಿದ್ದಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸಿ ನಿರ್ವಹಿಸತಕ್ಕದ್ದು. ಇವುಗಳ ಮೇಲೆ ಮಂಜೂರುದಾರರಿಗೆ ಯಾವುದೇ ಹಕ್ಕು ಇರುವುದಿಲ್ಲ.
13. ಆರ್ಜಿತ ಸಂಸ್ಥೆಯು ಕರ್ನಾಟಕ ಭೂ ಮಂಜೂರಾತಿ ನಿಯಮಾವಳಿ 1969ರ ನಿಯಮ 28(2) ರಡಿಯಲ್ಲಿ ನಿಗದಿಪಡಿಸಿರುವ ನಮೂನೆ/ಫಾರಂ–VIರಲ್ಲಿ ಕರಾರು ಪತ್ರವನ್ನು ಬರೆದುಕೊಡತಕ್ಕದ್ದು.

ಮೇಲ್ಕಂಡ ಯಾವುದೇ ಷರತ್ತು ಉಲ್ಲಂಘನೆಯಾದಲ್ಲಿ, ಈ ಭೂ ಮಂಜೂರಾತಿಯು ತನಗೆ ತಾನಾಗಿ ರದ್ದುಗೊಳ್ಳುತ್ತದೆ ಮತ್ತು ಆರ್ಜಿತ ಸಂಸ್ಥೆಗೆ ಯಾವುದೇ ತರಹದ ನಷ್ಟ ಉಂಟಾದಲ್ಲಿ ಸರ್ಕಾರವು ಇದಕ್ಕೆ ಜವಾಬ್ದಾರಿಯಾಗುವುದಿಲ್ಲ.

ವಿಶೇಷ ಜಿಲ್ಲಾಧಿಕಾರಿಗಳು,
ಬೆಂಗಳೂರು ಜಿಲ್ಲೆ, ಬೆಂಗಳೂರು.

ಪಿ.ಆರ್. 419

**ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಜಿಲ್ಲೆ, ಬೆಂಗಳೂರು**

**ಅಧಿಕೃತ ಜ್ಞಾಪನ**

**ಸಂ:ಎಲ್‌ಎನ್‌ಡಿ:(ಎನ್.ಎ):ಸಿಆರ್:203/07–08, ದಿನಾಂಕ: 26ನೇ ಆಗಸ್ಟ್ 2009**

**ವಿಷಯ:** ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ. 43 ರಲ್ಲಿ 46–31 ಎಕರೆ/ಗುಂಟೆ ಜಮೀನನ್ನು ಆಯುಕ್ತರು, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಮಂಜೂರು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಪತ್ರದ ಸಂಖ್ಯೆ:ಆರ್.ಡಿ:265:ಎಲ್‌ಜಿಬಿ/2007, (ಭಾಗ–6), ಬೆಂಗಳೂರು, ದಿನಾಂಕ:18.10.2007.
2. ತಹಶೀಲ್ದಾರ್, ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ರವರ ಪತ್ರದ ಸಂಖ್ಯೆ:462/07–08, ದಿನಾಂಕ: 22.10.2007 ರಂತೆ.
3. ಸರ್ಕಾರದ ಪತ್ರದ ಸಂಖ್ಯೆ:ಆರ್.ಡಿ:265:ಎಲ್‌ಜಿಬಿ/2007, (ಭಾಗ–6), ಬೆಂಗಳೂರು ದಿನಾಂಕ:27.1.2009 ರಂತೆ.

ಬೆಂಗಳೂರು ಜಿಲ್ಲೆ ವ್ಯಾಪ್ತಿಯಲ್ಲಿ ಇತ್ತೀಚೆಗೆ ಸರ್ಕಾರಿ ಜಮೀನುಗಳ ಮೇಲಿನ ಅತಿಕ್ರಮಣ / ಒತ್ತುವರಿಯನ್ನು ಸರ್ವೆ ಮಾಡಿ ಪತ್ತೆ ಹಚ್ಚಿರುವುದನ್ನು ಅತಿಕ್ರಮಣದಾರರಿಂದ ಈ ತಹಲ್‌ವರೆಗೆ ಖುಲ್ಲಾಪಡಿಸಲಾಗಿರುವ 8,717–00 ಎಕರೆಗಳಲ್ಲಿ ವಿವಿಧ ಸಾರ್ವಜನಿಕ / ಸಾಮಾಜಿಕ ಬೆಳವಣಿಗೆ ಮಂಜೂರಾತಿ ಮಾಡುವ ಸರ್ಕಾರದ ನಿರ್ಧಾರದ ಹಿನ್ನೆಲೆಯಲ್ಲಿ ಸರ್ಕಾರದ ಪತ್ರದ ಸಂಖ್ಯೆ:ಆರ್.ಡಿ:265:ಎಲ್‌ಜಿಬಿ/2007 (ಭಾಗ–6) ಬೆಂಗಳೂರು ದಿನಾಂಕ:18.10.2007ರ ಆದೇಶದಲ್ಲಿ ಬೆಂಗಳೂರು ಉತ್ತರ (ಅಪರ) ತಾಲ್ಲೂಕು, ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ.43 ರಲ್ಲಿ 46–31 ಎಕರೆ/ಗುಂಟೆ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಸಂಸ್ಥೆಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969 ನಿಯಮ 20(1)(ಸಿ) ಅನ್ವಯ ಮಂಜೂರಾತಿ ಮಾಡಲು ಸರ್ಕಾರ ತನ್ನ ಅನುಮತಿ ನೀಡಿರುತ್ತೆ.

ಈ ಕಛೇರಿಯಿಂದ ದಿನಾಂಕ: 13.11.2007 ರಂದು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯವರಿಗೆ ತಿಳುವಳಿಕೆ ಪತ್ರ ನೀಡಿ ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ. 43ರಲ್ಲಿ 46–31 ಎಕರೆ/ಗುಂಟೆ ಜಮೀನಿಗೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969, ನಿಯಮ 20(1)(ಸಿ) ರಂತೆ ಮಂಜೂರಿಯಾದ ಜಮೀನಿಗೆ ಕಿಮ್ಮತ್ತಿನ ಹಣ 2,21,82,631–00 (ಎರಡು ಕೋಟಿ ಇಪ್ಪತ್ತೊಂದು ಲಕ್ಷದ ಎಂಭತ್ತೆರಡು ಸಾವಿರದ ಆರುನೂರ ಮೂವತ್ತೊಂದು) ರೂ. ಗಳನ್ನು ಸರ್ಕಾರಕ್ಕೆ 15 ದಿನಗಳೊಳಗಾಗಿ ಪಾವತಿ ಮಾಡಲು ಸೂಚಿಸಲಾಗಿರುತ್ತದೆ.

ಉಲ್ಲೇಖ (3)ರ ಸರ್ಕಾರದ ಆದೇಶದಂತೆ ಉಚಿತವಾಗಿ ಮಂಜೂರು ಮಾಡಲು ಸೂಚಿಸಿರುವ ಮೇರೆಗೆ ಬೆಂಗಳೂರು ಉತ್ತರ (ಅಪರ) ತಾಲ್ಲೂಕು ಹೆಸರಘಟ್ಟ ಹೋಬಳಿ, ಗುಡ್ಡದಹಳ್ಳಿ ಗ್ರಾಮದ ಸರ್ವೆ ನಂ. 43 ರಲ್ಲಿ 46–31 ಎಕರೆ/ಗುಂಟೆ ಸರ್ಕಾರಿ ಗೋಮಾಳದ ಜಮೀನನ್ನು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಗೆ ಈ ಕೆಳಕಂಡ ಷರತ್ತಿಗೊಳಪಡಿಸಿ ಭೂ ಮಂಜೂರಾತಿ ಆದೇಶವನ್ನು ನೀಡಲಾಗಿದೆ.

**ಷರತ್ತುಗಳು**

1) ಈ ಜಮೀನಿನ ಮಂಜೂರಾತಿಯು 1969ರ ಕರ್ನಾಟಕ ಭೂ ಮಂಜೂರಾತಿ ನಿಯಮಗಳಿಗೆ ಬದ್ಧರಾಗಿರುತ್ತದೆ.
2) ಈ ಜಮೀನನ್ನು ಯಾವ ಉದ್ದೇಶಕ್ಕೆ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕೆ ಎರಡು ವರ್ಷಗಳ ಒಳಗೆ ಉಪಯೋಗಿಸಿಕೊಳ್ಳಬೇಕು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಈ ಜಮೀನನ್ನು ಉಪಯೋಗಿಸತಕ್ಕದ್ದಲ್ಲ.
3) ಪ್ರಶ್ನಿತ ಜಮೀನಿನ ಬಗ್ಗೆ ಯಾವುದೇ ನ್ಯಾಯಾಲಯದಲ್ಲಿ ದಾವೆಗಳು ದಾಖಲಾಗಿದ್ದಲ್ಲಿ ಈ ಮಂಜೂರಾತಿಯು ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟಿರುತ್ತದೆ.
4) ಈ ಸರ್ಕಾರಿ ಭೂಮಿ ಅಥವಾ ಭೂಮಿಯ ಒಂದು ಭಾಗವು ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಅಗತ್ಯವಾಗಿದ್ದಲ್ಲಿ ಸರ್ಕಾರಕ್ಕೆ ಹಿಂತೆಗೆದುಕೊಳ್ಳಲಾಗುವುದು. ಈ ರೀತಿ ಸರ್ಕಾರದ ವಶಕ್ಕೆ ಪಡೆದ ಜಮೀನಿನಲ್ಲಿ ಉಚಿತವಾಗಿ ನೀಡಿರುವ ಕಾರಣ ಯಾವುದೇ ಪರಿಹಾರವನ್ನು ನೀಡಲಾಗುವುದಿಲ್ಲ.
5) ಸದರಿ ಜಮೀನು ನಿಮಗೆ ಅವಶ್ಯಕವಿಲ್ಲವೆಂದು ಕಂಡು ಬಂದಲ್ಲಿ ಕಂದಾಯ ಇಲಾಖೆಗೆ ಹಿಂದಿರುಗಿಸತಕ್ಕದ್ದು.
6) ಮೇಲ್ಕಂಡ ಯಾವುದೇ ಷರತ್ತುಗಳನ್ನು ಉಲ್ಲಂಘಿಸಿದಲ್ಲಿ ಈ ಭೂ ಮಂಜೂರಾತಿಯು ತಾನೇ ತಾನಾಗಿ ರದ್ದುಗೊಳ್ಳುತ್ತದೆ.

**ಹೆಚ್. ರಾಮಾಂಜನೇಯ**

ಪಿ.ಆರ್. 420 ವಿಶೇಷ ಜಿಲ್ಲಾಧಿಕಾರಿಗಳು, ಬೆಂಗಳೂರು ಜಿಲ್ಲೆ, ಬೆಂಗಳೂರು.

## ತಹಶೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು, ಆನೇಕಲ್

### ಪ್ರಕಟಣೆ

### ನಮೂನೆ–27

**ನಂ. ಎಲ್.ಎನ್.ಡಿ/ಸಿ.ಆರ್/233/09–10, ದಿನಾಂಕ: 14ನೇ ಸೆಪ್ಟೆಂಬರ್ 2009**

1) ಕರ್ನಾಟಕ ರಾಜ್ಯ ಸರ್ಕಾರದ ನಿಯಮಾವಳಿಗಳಂತೆ ಸರ್ಕಾರಿ ತೋಪು ಜಮೀನಾಗಿರುತ್ತದೆ. ಅದರಂತೆ ಲಿಂಗಾಪುರ ಗ್ರಾಮದ ಸ.ನಂ. 91 ರಲ್ಲಿ ವಿಸ್ತೀರ್ಣ 0–21 (ಎ–ಗುಂ) ಜಮೀನನ್ನು ಸಾರ್ವಜನಿಕ ರಸ್ತೆಗಾಗಿ ಕಾಯ್ದಿರಿಸಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1)ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ.ನಂ.91 ಜಮೀನಿನಲ್ಲಿ 0–21 ಎ–ಗುಂ ಜಮೀನನ್ನು ಸಾರ್ವಜನಿಕ ಉಪಯೋಗಕ್ಕೆ ಕಾಯ್ದಿರಿಸುವ ಉದ್ದೇಶದಿಂದ ಹಾಗೂ ಸಾರ್ವಜನಿಕರ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತವೆ.

2) ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಥವಾ ಇತರೆ ಆಸಕ್ತಿ ಉಳ್ಳವರು ಅಂದರೆ ಸರ್ಕಾರಿ ತೋಪು ಜಮೀನನ್ನು ಸಾರ್ವಜನಿಕ ಉದ್ದೇಶಕ್ಕೆ ರಸ್ತೆಗೆ ವಿಲೇವಾರಿ ಮಾಡಿರುವುದರಿಂದ ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಿಂದ 90 ದಿನಗಳ ಒಳಗಾಗಿ ಲಿಖಿತ ಮೂಲಕ ಆನೇಕಲ್ ತಾಲ್ಲೂಕು ತಹಶೀಲ್ದಾರ್ ರವರಿಗೆ ತಲುಪುವಂತೆ ಕಳಿಸುವುದು ನಿಗದಿತ ವೇಳೆಯನ್ನು ಮೀರಿ ಬರುವಂತಹ ಆಕ್ಷೇಪಣೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಅಲ್ಲದೆ ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ಗುಂಡು ತೋಪು ಜಮೀನಿನ 0–21 ಎ–ಗುಂ ಜಮೀನನ್ನು ರಸ್ತೆಗಾಗಿ ಸಾರ್ವಜನಿಕವಾಗಿ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

| | | |
|---|---|---|
| ಜಿಲ್ಲೆ: ಬೆಂಗಳೂರು | ತಾಲ್ಲೂಕು: ಆನೇಕಲ್ | ಗ್ರಾಮ: ಲಿಂಗಾಪುರ |
| ಸ.ನಂ.– 91 | ವಿಸ್ತೀರ್ಣ: 0–21 (ಎ–ಗುಂ) | ವರ್ಗೀಕರಣ: ತೋಪು |

ಪೂರ್ವಕ್ಕೆ – ಸ.ನಂ.90 ಪಶ್ಚಿಮಕ್ಕೆ – ಸ.ನಂ.92

ಉತ್ತರಕ್ಕೆ – ರಸ್ತೆ ದಕ್ಷಿಣಕ್ಕೆ – ಸ.ನಂ.83

ತಹಶೀಲ್ದಾರ್,
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್. 430

**ತಹಶೀಲ್ದಾರ್‌ರವರ ಕಾರ್ಯಾಲಯ, ಆನೇಕಲ್ ತಾಲ್ಲೂಕು, ಆನೇಕಲ್**

**ಪ್ರಕಟಣೆ**

**ನಮೂನೆ–27**

**ನಂ. ಎಲ್.ಎನ್.ಡಿ/ಸಿ.ಆರ್/234/09–10, ದಿನಾಂಕ: 14ನೇ ಸೆಪ್ಟೆಂಬರ್ 2009**

1) ಕರ್ನಾಟಕ ರಾಜ್ಯ ಸರ್ಕಾರದ ನಿಯಮಾವಳಿಗಳಂತೆ ಸರ್ಕಾರಿ ಗುಂಡು ತೋಪು ಜಮೀನಾಗಿರುತ್ತದೆ. ಅದರಂತೆ ಸಿಂಗಸಂದ್ರ ಗ್ರಾಮದ ಸ.ನಂ. 72 ರಲ್ಲಿ ವಿಸ್ತೀರ್ಣ 0–37 ಎ–ಗುಂ ಜಮೀನನ್ನು ಸ್ಮಶಾನಕ್ಕಾಗಿ ಕಾಯ್ದಿರಿಸಲು ಉದ್ದೇಶಿಸಿದ್ದು, ಸದರಿ ಜಮೀನು ಹಾಲಿ ಸಾರ್ವಜನಿಕ ಉಪಯೋಗಕ್ಕೆ ಅವಶ್ಯಕತೆ ಇರುವುದಿಲ್ಲ. ಆದುದರಿಂದ ಕರ್ನಾಟಕ ಭೂ ಕಂದಾಯ ಕಾಯ್ದೆ 1964ರ ಕಲಂ 68(1)ರ ರೀತ್ಯಾ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ವಿವರಿಸಿರುವ ಸ.ನಂ.72 ಜಮೀನಿನಲ್ಲಿ 0–37 ಎ–ಗುಂ ಜಮೀನನ್ನು ಸಾರ್ವಜನಿಕ ಉಪಯೋಗಕ್ಕೆ ಕಾಯ್ದಿರಿಸುವ ಉದ್ದೇಶದಿಂದ ಹಾಗೂ ಸಾರ್ವಜನಿಕರ ಉಪಯೋಗಕ್ಕೆ ಬೇಕಿಲ್ಲದಿರುವ ಪ್ರಯುಕ್ತ ಸದರಿ ಜಮೀನಿನ ಮೇಲೆ ಸಾರ್ವಜನಿಕರ ಹಕ್ಕು ವೈಯಕ್ತಿಕ ಹಕ್ಕುಗಳು ನಿರ್ಗಮನಗೊಳ್ಳುತ್ತವೆ.

2) ಆದ ಪ್ರಯುಕ್ತ ಯಾವುದೇ ವ್ಯಕ್ತಿ ಅಂತಹ ಜಮೀನಿನ ಮೇಲೆ ಆಸಕ್ತಿ ಉಳ್ಳವರು ಅಥವಾ ಇತರೆ ಆಸಕ್ತಿ ಉಳ್ಳವರು ಅಂದರೆ ಸರ್ಕಾರಿ ಗುಂಡು ತೋಪು ಜಮೀನನ್ನು ಸಾರ್ವಜನಿಕ ಸ್ಮಶಾನಕ್ಕಾಗಿ ವಿಲೇವಾರಿ ಮಾಡಿರುವುದರಿಂದ ತೊಂದರೆಗೊಳಗಾಗಿರುವವರು ಈ ಪ್ರಕಟಣೆಯ ದಿನಾಂಕದಿಂದ 90 ದಿನಗಳ ಒಳಗಾಗಿ ಲಿಖಿತ ಮೂಲಕ ಆನೇಕಲ್ ತಾಲ್ಲೂಕು ತಹಶೀಲ್ದಾರ್ ರವರಿಗೆ ತಲುಪುವಂತೆ ಕಳಿಸುವುದು ನಿಗದಿತ ವೇಳೆಯನ್ನು ಮೀರಿ ಬರುವಂತಹ ಆಕ್ಷೇಪಣೆಯನ್ನು ಗಣನೆಗೆ ತೆಗೆದುಕೊಳ್ಳಲಾಗುವುದಿಲ್ಲ. ಅಲ್ಲದೆ ನಿಗದಿತ ವೇಳೆಯಲ್ಲಿ ಯಾವುದೇ ಆಕ್ಷೇಪಣೆಗಳು ತಲುಪದಿದ್ದಲ್ಲಿ ಸದರಿ ಸರ್ಕಾರಿ ತೋಪು ಜಮೀನಿನ 0–37 ಎ–ಗುಂ ಜಮೀನನ್ನು ಸ್ಮಶಾನಕ್ಕಾಗಿ ಸಾರ್ವಜನಿಕವಾಗಿ ವಿಲೇವಾರಿ ಮಾಡುವ ಬಗ್ಗೆ ಯಾವುದೇ ಆಕ್ಷೇಪಣೆಗಳು ಇರುವುದಿಲ್ಲವೆಂದು ಪರಿಗಣಿಸಿ ಕಾನೂನು ರೀತ್ಯಾ ಮುಂದಿನ ಕ್ರಮ ಕೈಗೊಳ್ಳಲಾಗುವುದು.

**ಷೆಡ್ಯೂಲ್**

| | | |
|---|---|---|
| ಜಿಲ್ಲೆ: ಬೆಂಗಳೂರು | ತಾಲ್ಲೂಕು: ಆನೇಕಲ್ | ಗ್ರಾಮ: ಸಿಂಗಸಂದ್ರ |
| ಸ.ನಂ.– 72 | ವಿಸ್ತೀರ್ಣ: 0–37 (ಎ–ಗುಂ) | ವರ್ಗೀಕರಣ: ಗುಂಡು ತೋಪು |

ಪೂರ್ವಕ್ಕೆ – ಸ.ನಂ.75, 79 ಪಶ್ಚಿಮಕ್ಕೆ – ಸ.ನಂ. 71

ಉತ್ತರಕ್ಕೆ – ಸ.ನಂ. 73 ದಕ್ಷಿಣಕ್ಕೆ – ಸ.ನಂ.70, 69

ತಹಶೀಲ್ದಾರ್,
ಆನೇಕಲ್ ತಾಲ್ಲೂಕು, ಆನೇಕಲ್.

ಪಿ.ಆರ್. 431